## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 577 |
| ಸದಸ್ಯರ ಹೆಸರು | : | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 17-12-2021. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ರಾಜ್ಯದಲ್ಲಿನ ಪಂಚಾಯತ್ ವ್ಯವಸ್ಥೆಯ ಆರ್ಥಿಕ ಸ್ಥಿತಿ ಕಳೆದ 3 ವರ್ಷಗಳಲ್ಲಿ ಕಛೇರಿ ನಿರ್ವಹಣೆ, ಸಿಬ್ಬಂದಿ ವೇತನ ಮತ್ತು ಅಭಿವೃದ್ಧಿ ಕಾಮಗಾರಿಗಳಿಗೆ ಅನುದಾನವಿಲ್ಲದೆ ಕುಸಿದು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಪಂಚಾಯತ್ ವ್ಯವಸ್ಥೆ ಸುಧಾರಿಸಲು ಕೈಗೊಂಡಿರುವ ಕ್ರಮಗಳೇನು: (ಸಂಪೂರ್ಣ ಮಾಹಿತಿ ನೀಡುವುದು)</td><td>
ಬಂದಿಲ್ಲ.
ಆದಾಗ್ಯೂ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 113 ರಂತೆ ಗ್ರಾಮ ಪಂಚಾಯತಿಯ ಸಿಬ್ಬಂದಿಗಳ ವೇತನವನ್ನು ಗ್ರಾಮ ಪಂಚಾಯತಿ ನಿಧಿಯಿಂದ ಅಂದರೆ ಸ್ವಂತ ಸಂಪನ್ಮೂಲದಿಂದ ಪಾವತಿಸುವುದು, ಪ್ರತಿಯೊಂದು ಗ್ರಾಮ ಪಂಚಾಯತಿಯ ಕರ್ತವ್ಯವಾಗಿರುತ್ತದೆ. ಆದರೂ ರಾಜ್ಯದ ಹಲವಾರು ಗ್ರಾಮ ಪಂಚಾಯತಿಗಳಲ್ಲಿ ಸಂಪನ್ಮೂಲದ ಕೊರತೆಯಿಂದ ಸಮಯಕ್ಕೆ ಸರಿಯಾಗಿ ಸಿಬ್ಬಂದಿಗಳ ವೇತನ ಪಾವತಿಸದ ಕಾರಣ ಸರ್ಕಾರವು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಅನುದಾನದಲ್ಲಿ ಭಾಗಶಃ ವೇತನಕ್ಕಾಗಿ ರೂ. 511.20 ಕೋಟಿಗಳನ್ನು ಸರ್ಕಾರದಿಂದ ತ್ರೈಮಾಸಿಕವಾಗಿ 4 ಕಂತುಗಳಲ್ಲಿ ಬಿಡುಗಡೆ ಮಾಡಲಾಗುತ್ತಿದೆ.
ಪ್ರಸ್ತುತ ಗ್ರಾಮ ಪಂಚಾಯತಿ ನೌಕರರ ವೇತನಕ್ಕಾಗಿ 2021-22ನೇ ಸಾಲಿನಲ್ಲಿ ರೂ. 383.40 ಕೋಟಿಗಳನ್ನು ಸರ್ಕಾರದಿಂದ ತ್ರೈಮಾಸಿಕವಾಗಿ 3 ಕಂತುಗಳಲ್ಲಿ ಬಿಡುಗಡೆ ಮಾಡಲಾಗಿದೆ.
ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 199 ರಂತೆ ಗ್ರಾಮ ಪಂಚಾಯತಿಗಳು ಭೂಮಿ ಮತ್ತು ಕಟ್ಟಡಗಳು, ನೀರು, ಮೊಬೈಲ್ ಟವರ್‌ಗಳು, ವಿಂಡ್‌ಮಿಲ್‌ಗಳು ಮತ್ತು ಸೋಲಾರ್ ಪಾರ್ಕ್‌ಗಳ ಮೇಲೆ ತೆರಿಗೆ ವಿಧಿಸಬಹುದಾಗಿರುತ್ತದೆ. ಇವುಗಳು ಗ್ರಾಮ ಪಂಚಾಯತಿಗಳ ಗ್ರಾಮ ಪಂಚಾಯತಿ ಆದಾಯ ಮೂಲಗಳಾಗಿರುತ್ತವೆ.
ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಗ್ರಾಮ ಪಂಚಾಯತಿಗಳಿಗೆ ವಾರ್ಷಿಕವಾಗಿ ಸಿಗುವ ಅನುದಾನದ ವಿವರ ಈ ಕೆಳಕಂಡಂತಿದೆ.
<table>
<tr><th>ಕ್ರ.ಸಂ</th><th>ಯೋಜನೆ / ಕಾರ್ಯಕ್ರಮ</th><th>ಅನುದಾನದ ಮೊತ್ತ</th></tr>
<tr><td>1</td><td>ಶಾಸನಬದ್ಧ ಅನುದಾನ</td><td>ರೂ.10-12 ಲಕ್ಷಗಳು.</td></tr>
<tr><td>2</td><td>15ನೇ ಹಣಕಾಸು ಆಯೋಗದ ಅನುದಾನ</td><td>ಜನ ಸಂಖ್ಯೆ ಮತ್ತು ಭೌಗೋಳಿಕ ಪ್ರದೇಶದ ಆಧಾರದ ಮೇಲೆ ರೂ. 20-30 ಲಕ್ಷಗಳು.</td></tr>
<tr><td>3</td><td>ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ</td><td>ಪ್ರತಿ ಗ್ರಾಮ ಪಂಚಾಯಿತಿಯಲ್ಲಿನ ಕಾರ್ಮಿಕ ಆಯವ್ಯಯ ಆಧರಿಸಿ ಅನುದಾನ ನೀಡಲಾಗುತ್ತಿದೆ.</td></tr>
</table>
</td></tr>
</table>

<table>
<tr><td></td><td></td><td><table>
<tr><td>4</td><td>ಸ್ವಚ್ಛ ಭಾರತ್ ಮಿಷನ್</td><td>ಶೌಚಾಲಯ ನಿರ್ಮಿಸಿಕೊಳ್ಳಲು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಫಲಾನುಭವಿಗೆ ರೂ.15,000/- ಮತ್ತು ಸಾಮಾನ್ಯ ಫಲಾನುಭವಿಗೆ ರೂ.12,000/-ಗಳು.</td></tr>
<tr><td>5</td><td>ಮುಖ್ಯ ಮಂತ್ರಿ ಗ್ರಾಮ ವಿಕಾಸ ಯೋಜನೆ</td><td>ಆಯ್ಕೆಯಾದ ಗ್ರಾಮ ಒಂದಕ್ಕೆ ಒಂದು ಕೋಟಿ ರೂಪಾಯಿಗಳು.</td></tr>
</table></td></tr>
<tr><td>(ಆ)</td><td>15ನೇ ಹಣಕಾಸು ಯೋಜನೆ ಅಡಿ ಜನಸಂಖ್ಯೆಗೆ ಅನುಗುಣವಾಗಿ ಕನಿಷ್ಠ 10 ಲಕ್ಷದಿಂದ ಗರಿಷ್ಠ 30 ಲಕ್ಷ ರೂವರೆಗೆ ಅನುದಾನವನ್ನು ಗ್ರಾಮ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಬೇಕಾಗಿದ್ದು, ಇದರಲ್ಲಿ ಶೇಕಡಾ 60% ರಷ್ಟು ಅನುದಾನವನ್ನು ರಾಜ್ಯ ಸರ್ಕಾರ ವಾಪಸ್ ಪಡೆದಿರುವುದು ನಿಜವೇ; ಹಾಗಿದ್ದಲ್ಲಿ, ಸಂಪೂರ್ಣ ಮಾಹಿತಿ ನೀಡುವುದು;</td><td>ಇಲ್ಲ.</td></tr>
<tr><td>(ಇ)</td><td>15ನೇ ಹಣಕಾಸು ಯೋಜನೆಯಡಿ ಬಿಡುಗಡೆಯಾಗಿರುವ ಅನುದಾನದಲ್ಲಿ ಶೇ.60% ರಷ್ಟು ಅನುದಾನವನ್ನು ಜಲಜೀವನ್ ಮಿಷನ್ ಯೋಜನೆಗೆ ಮರುಳಿಸಬೇಕಾಗಿದ್ದು, ಉಳಿದ ಅನುದಾನದಲ್ಲಿ ಶೇ.15% ರಷ್ಟು ಪರಿಶಿಷ್ಟರಿಗೆ, ತಲಾ ಶೇ.10% ರಷ್ಟು ಕುಡಿಯುವ ನೀರು ಮತ್ತು ರಸ್ತೆ ಅಭಿವೃದ್ಧಿಗೆ ಕಡ್ಡಾಯವಾಗಿ ಮೀಸಲಿಡಬೇಕಾಗಿದ್ದು, ಪ್ರತಿ ಗ್ರಾಮ ಪಂಚಾಯತ್ ಸದಸ್ಯನಿಗೆ ಕೇವಲ 25000 ಸಾವಿರ ರೂ.ಗಳ ಅನುದಾನವನ್ನು ತನ್ನ ಕ್ಷೇತ್ರದ ಅಭಿವೃದ್ಧಿಗೆ ಉಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಇಲ್ಲ.</td></tr>
<tr><td>(ಈ)</td><td>ಹಾಗಿದ್ದಲ್ಲಿ, ಈ ಗ್ರಾಮ ಪಂಚಾಯತ್ ವ್ಯವಸ್ಥೆಯ ಆರ್ಥಿಕ ಸಂಕಷ್ಟ ಸರಿಪಡಿಸಲು ಸರ್ಕಾರವು ಕೈಗೊಂಡಿರುವ ಮಾರ್ಗೋಪಾಯಗಳು ಯಾವುವು? (ಸಂಪೂರ್ಣ ಮಾಹಿತಿ ನೀಡುವುದು)</td><td>ಅನ್ವಯಿಸುವುದಿಲ್ಲ.</td></tr>
</table>

ಸಂಖ್ಯೆ: ಗ್ರಾಅಪ 436 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.